ಸದನದಲ್ಲಿ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತಮೂರನೆಯ ಅಧಿವೇಶನ

ಮಂಗಳವಾರ, ದಿನಾಂಕ: 2ನೇ ಫೆಬ್ರುವರಿ, 2021

ಹಾರೋಹಳ್ಳಿ ಕೈಗಾರಿಕಾ ವಲಯದಲ್ಲಿ ಅಗ್ನಿ ಶಾಮಕ ಕೇಂದ್ರವಿಲ್ಲದಿರುವ ಕುರಿತು

ಶ್ರೀ ಯು.ಬಿ. ವೆಂಕಟೇಶ್ (ನಾಮನಿರ್ದೇಶನ ಹೊಂದಿದವರು) -

37 (206) ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ-

(ಅ) ಹಾರೋಹಳ್ಳಿ ಕೈಗಾರಿಕಾ ವಲಯದಲ್ಲಿ ಅಗ್ನಿ ಶಾಮಕ ಕೇಂದ್ರವಿಲ್ಲದೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; ಬಂದಿದ್ದಲ್ಲಿ, ಸರ್ಕಾರ ಕೈಗೊಂಡಿರುವ ಕ್ರಮಗಳೇನು ;

(ಆ) ಕೈಗಾರಿಕಾ ವಲಯಗಳಲ್ಲಿ ಅಗ್ನಿ ಶಾಮಕ ಕೇಂದ್ರ ಇರಲೇಬೇಕೆಂಬ ನಿಯಮವಿದೆಯೇ; ಆಗಿದ್ದಲ್ಲಿ, ಈ ವಲಯದಲ್ಲಿ ಅಗ್ನಿ ಶಾಮಕ ಕೇಂದ್ರ ತೆರೆಯದಿರಲು ಕಾರಣವೇನು ?